# ಜಿಲ್ಲಾ ವಾರ್ತೆ

## ಉತ್ತರ ಕನ್ನಡ

### ಪ್ರೊ. ಕೆ.ಎನ್. ತಿಗಡಿಯವರಿಗೆ ಜ್ಞಾನ ಸಂಜೀವಿನಿ ಪ್ರಶಸ್ತಿ:

ಉತ್ತರ ಕನ್ನಡ ಜಿಲ್ಲೆ ವೃಕ್ಷಮಣಿದಾರರು ಹಾಗೂ ಶ್ರೀ ಸಾಯಿನಾಥ್ ಶಿಕ್ಷಣ ಸೇವಾ ಸಮಿತಿ, ದಾಂಡೇಲಿಯ ಸಂಸ್ಥಾಪಕ ಅಧ್ಯಕ್ಷರಾದ ಪ್ರೊ. ಕೆ.ಎನ್. ತಿಗಡಿಯವರಿಗೆ ಉಪನ್ಯಾಸಕ ಸೇವೆಯಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು ಪರಿಗಣಿಸಿ ಶಿಕ್ಷಣ ಜ್ಞಾನ ಪತ್ರಿಕೆಯ 7ನೇ ವಾರ್ಷಿಕೋತ್ಸವದ ಶುಭ ಸಂದರ್ಭದಲ್ಲಿ ಇತ್ತೀಚೆಗೆ ನಡೆದ ಕಾರ್ಯಕ್ರಮದಲ್ಲಿ, ಸರ್ಕಾರಿ ನೌಕರರ ಭವನ, ಬೆಂಗಳೂರಿನಲ್ಲಿ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಇಂಧನ ಸಚಿವರಾದ ಮಾನ್ಯ ಶ್ರೀ ವಿ. ಸೋಮಣ್ಣನವರು ಪ್ರಶಸ್ತಿಯನ್ನು ನೀಡಿದರು. ಈ ಸಮಾರಂಭದಲ್ಲಿ ಡಾ॥ ಮಲ್ಲನಗೌಡ ನಾಡಗೌಡ, ವಿಧಾನಪರಿಷತ್ ಸದಸ್ಯರು, ಶ್ರೀ ಜಿ. ಎಸ್. ಫಾಲಾಕ್ಷಪ್ಪ, ಸಂಸ್ಥಾಪಕರು. ಜಿ. ಎಸ್. ಶಿಕ್ಷಣ ಸಂಸ್ಥೆ ಬೆಂಗಳೂರು ಮತ್ತು ಡಾ॥ ಎಸ್. ರಾಜು, ಗೌರವ ಸಂಸ್ಥಾಪಕರು ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು.



### ಹೊನ್ನಾವರ ತಾಲ್ಲೂಕಿನ

ಹನುಮಾನ್ ಸ್ಕೌಟ್‌ದಳದ ಸ್ಕೌಟುಗಳು ಸರ್ಕಾರಿಯ ಪ್ರಾಥಮಿಕ ಶಾಲೆ ಆಳ್ಳಂಕೆಯಲ್ಲಿ ದಿನಾಂಕ 20-6-2009 ರಂದು ಸಾರ್ವಜನಿಕ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು




ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರದ ಉದ್ಘಾಟನಾ ಸಮಾರಂಭ ಹಾಗೂ ಡಾ॥ ಬಿ.ಆರ್. ಅಂಬೇಡ್ಕರ್ ಜನ್ಮ ದಿನಾಚರಣೆಯನ್ನು ದಾವಣಗೆರೆ ಜಿಲ್ಲೆಯ ಸ್ಕೌಟ್ಸ್ ಗೈಡ್ಸ್ ಮತ್ತು ಪದಾಧಿಕಾರಿಗಳೊಂದಿಗೆ ಮಾರ್ಥೋಮ ಆಂಗ್ಲ ಶಾಲೆಯ ಫಾ಼ದರ್ ಮ್ಯಾಥ್ಯೂ ರವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಶಾಲೆಯ ಮುಖ್ಯೋಪಾಧ್ಯಾಯಿನಿ, ಶ್ರೀ ಫ಼ರ್ನಾಂಡೀಸ್, ಎಲ್.ಟಿ. (ಸ್ಕೌಟ್ಸ್), ಶ್ರೀ ಟಿ.ವಿನಾಯಕ ಇವರು ಉಪಸ್ಥಿತರಿದ್ದರು.

# ಬಳ್ಳಾರಿ

2009-10ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ ಸರ್ವತೋಮುಖ ಬೆಳವಣಿಗೆಗೆ ಪ್ರತಿ ತಾಲ್ಲೂಕಿಗೆ ಈ ಕೆಳಕಂಡವರನ್ನು ನೋಡಲ್ ಅಧಿಕಾರಿಗಳಾಗಿ ಜಿಲ್ಲಾ ಸಂಸ್ಥೆಯು ನೇಮಕ ಮಾಡಿರುತ್ತದೆ. ಶ್ರೀಮತಿ ಶಾಂತಲಕ್ಷ್ಮೀ ಜಯರಾಮ್ - ಜಿಲ್ಲಾ ಆಯುಕ್ತರು (ಗೈಡ್ಸ್) - ಬಳ್ಳಾರಿ ತಾಲ್ಲೂಕ, ಶ್ರೀಮತಿ ಟಿ. ಲೀಲಾ, - ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) - ಹೊಸಪೇಟೆ ತಾಲ್ಲೂಕ, ಶ್ರೀ ಕೆ. ವೀರೇಶ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) - ಸಂಡೂರು ತಾಲ್ಲೂಕ, ಶ್ರೀ ಆರ್. ಚಂದ್ರಪ್ಪ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) - ಕೂಡ್ಲಿಗಿ ತಾಲ್ಲೂಕ, ಶ್ರೀ ಎಂ.ಎ. ಶಕೀಬ್, ಜಿಲ್ಲಾ ಕಾರ್ಯದರ್ಶಿ - ಹಗರಿ ಬೊಮ್ಮನಹಳ್ಳಿ ತಾಲ್ಲೂಕ, ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು - ಹಡಗಲಿ, ಸಿರಗುಪ್ಪ ತಾಲ್ಲೂಕ.

ಎಂ.ಪಿ.ಸಿ. ಕಮಲಾಪುರದಲ್ಲಿ ಬೇಸಿಗೆ ಶಿಬಿರವನ್ನು ಸ್ಕೌಟ್ಸ್/ಗೈಡ್ಸ್‌ಗಳಿಗೆ ಇತ್ತೀಚೆಗೆ ಏರ್ಪಡಿಸಲಾಗಿತ್ತು. ಇದರ ನಿರ್ವಹಣೆಯನ್ನು ಲಿಟಲ್ ಫ್ಲವರ್ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ ಮಾಸ್ಟರ್/ಗೈಡ್ ಕ್ಯಾಪ್ಟನ್ ವಹಿಸಿದ್ದರು. ಶ್ರೀ ಎಂ.ಎ. ಶಕೀಬ್, ಶ್ರೀ ರಾಕೇಶ್, ನಾಯಕತ್ವ ವಹಿಸಿದ್ದರು.

ದಿನಾಂಕ 7-6-2009ರಂದು ಜಿಲ್ಲೆಯ ಎಲ್ಲಾ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳು, ನೋಡಲ್ ಅಧಿಕಾರಿಗಳು ಮತ್ತು ವೃಕ್ಷಮಣಿದಾರರ ಸಭೆಯನ್ನು ಏರ್ಪಡಿಸಲಾಗಿತ್ತು. ಸಭೆಯಲ್ಲಿ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಗಳು ಕೈಗೊಳ್ಳಬೇಕಾದ ಚಟುವಟಿಕೆಗಳ ಬಗ್ಗೆ ವಿವರಣೆ ನೀಡಲಾಯಿತು ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಸುತ್ತೋಲೆಯಂತೆ ಪ್ರತೀ ತಾಲೂಕಿನಲ್ಲಿ ಸ್ಕೌಟರ್ಸ್/ಗೈಡರ್ಸ್ ಸಭೆಯನ್ನು ಏರ್ಪಡಿಸಲು ತಿಳಿಸಲಾಯಿತು.

**ವಿಶ್ವ ಪರಿಸರ ದಿನಾಚರಣೆ:** 25-6-2009 ರಂದು ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಇದೇ ಸಂದರ್ಭದಲ್ಲಿ ಪ್ಲಾಸ್ಟಿಕ್ ಬಳಕೆಯಿಂದ ಪರಿಸರದ ಮೇಲೆ ಬೀರುವ ದುಷ್ಪರಿಣಾಮಗಳ ಬಗ್ಗೆ ಕರಪತ್ರದೊಂದಿಗೆ ಸ್ಕೌಟ್ಸ್/ಗೈಡ್ಸ್‌ಗಳ ಪಥಸಂಚಲನವನ್ನು ಬಳ್ಳಾರಿ ನಗರದ ವಿವಿಧ ಬಡಾವಣೆಗಳಲ್ಲಿ ಏರ್ಪಡಿಸಲಾಗಿತ್ತು. ಶ್ರೀ ಕೆ.ಬಿ.ಕೊಟ್ರೇಶ್, ಪರಿಸರ ಅಧಿಕಾರಿಗಳು, ಬಳ್ಳಾರಿ ಇವರು ಮಕ್ಕಳನ್ನು ಕುರಿತು ಪ್ಲಾಸ್ಟಿಕ್ ಬಳಕೆಯಿಂದ ಸಮಾಜದ ಮೇಲೆ ಬೀರುವ ದುಷ್ಪರಿಣಾಮಗಳ ಬಗ್ಗೆ ಉಪನ್ಯಾಸ ನೀಡಿದರು. ಶ್ರೀ ವೀರೇಶ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ವಿ. ಪ್ರಭಾಕರ್, ಜಿಲ್ಲಾ ಕೋಶಾಧಿಕಾರಿ ಮತ್ತು ಶ್ರೀ ಎಂ.ಎ. ಶಕೀಬ್, ಜಿಲ್ಲಾ ಕಾರ್ಯದರ್ಶಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.



**Adventure Camp for Scouts & Guides**

The Bharat Scouts & Guides, Bellary organised an Adventure Camp on 17-7-2009 for Bellary Taluk Scouts & Guides at Bellary Fort. 71 Scouts, 41 Guides participated in the Rock Climbing Camp.

The NOPASANA Association extended their support for the Camp. Sri M.A. Shakib, Dist. Secretary was the leader. Sri Mohammed Pasha, DOC(S). Co-ordinated the event.

# ಹಾಸನ

ಹಾಸನ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಮತ್ತು ಕೆಂಚಟ್ಟಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸಂಯುಕ್ತಾಶ್ರಯದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಹೊರ ಸಂಚಾರ ಹಾಗೂ ವನ ಮಹೋತ್ಸವ ಕಾರ್ಯಕ್ರಮವನ್ನು ದಿನಾಂಕ 4-7-2009 ರಂದು ಏರ್ಪಡಿಸಲಾಗಿತ್ತು. ಜಿಲ್ಲಾ ಸ್ಕೌಟ್ ಭವನದಿಂದ ಕಾಲ್ನಡಿಗೆಯಲ್ಲಿ ಹೊರ ಸಂಚಾರ ಹೊರಟ ಸ್ಕೌಟ್ಸ್ - ಗೈಡ್ಸ್‌ಗಳು ನಗರದ ಬಿ.ಎಂ. ರಸ್ತೆಯಿಂದ ಹಾದು ಡೈರಿ ವೃತ್ತ, ಮೂಲಕ ಕೆಂಚಟ್ಟಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆವರೆಗೆ 7 ಕಿ.ಮೀ. ಸಂಚರಿಸಿದರು. ಶಾಲೆಯ ಆವರಣದಲ್ಲಿ ನಡೆದ ವನಮಹೋತ್ಸವ ಕಾರ್ಯಕ್ರಮಕ್ಕೆ ಜಿಲ್ಲಾ ಅರಣ್ಯ ಉಪ ಸಂರಕ್ಷಣಾಧಿಕಾರಿಗಳಾದ ಶ್ರೀ ಬಾಲಚಂದ್ರರವರು ಆಗಮಿಸಿ ಗಿಡನೆಟ್ಟು ಮಾತನಾಡುತ್ತಾ ಪರಿಸರ ಕಾಪಾಡಲು ಕರೆನೀಡಿದರು. ಇದೇ ಸಂದರ್ಭದಲ್ಲಿ ಉಪಸ್ಥಿತರಿದ್ದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಪುರುಷೋತ್ತಮ ಪ್ರಭು ರವರು ಸಸಿ ನೆಟ್ಟು ಮಾತನಾಡುತ್ತಾ ಪ್ರತಿಯೊಬ್ಬರು ಹುಟ್ಟಿದ ಹಬ್ಬದ ದಿನವನ್ನು ಕೇಕ್ ನೀಡುವ ಜೊತೆಗೆ ಒಂದೊಂದು ಸಸಿಯನ್ನು ನೀಡಲು ಕರೆ ನೀಡಿದರು.

ಸಮಾರಂಭದಲ್ಲಿ ಕೆಂಚಟ್ಟಹಳ್ಳಿ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಮತಿ ಈರಮ್ಮ ತಾಲ್ಲೋಕ್ ಪಂಚಾಯ್ತಿ ಸದಸ್ಯರಾದ ಶ್ರೀ ದಿನೇಶ್, ಶಾಲಾಭಿವೃದ್ಧಿ ಸಮಿತಿಯ ಅಧ್ಯಕ್ಷರಾದ ಶ್ರೀಮತಿ ಪಂಕಜ ಮತ್ತು ಸದಸ್ಯರು, ಶಿಕ್ಷಣ ಇಲಾಖೆಯ ಸಿ.ಎ.ಇ.ಓ.ಗಳಾದ ಶ್ರೀ ಗಂಗಾಧರಪ್ಪ ಹಾಗೂ ಜಿಲ್ಲಾ ಪಂಚಾಯ್ತಿ ಸದಸ್ಯರಾದ ಶ್ರೀ ಕುಮಾರ್ ಮತ್ತು ಕೆಂಚಟ್ಟಹಳ್ಳಿ ಗ್ರಾಮಸ್ಥರು ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವೈ. ಎಸ್. ವೀರಭದ್ರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್.ಆರ್. ಚಂದ್ರಾಚಾರ್, ಶ್ರೀ ಮುತ್ತೇಗೌಡ, ರಾಜ್ಯ ಸ್ಕೌಟರ್ ಪ್ರತಿನಿಧಿ, ಶ್ರೀಮತಿ ವೈ.ಡಿ. ಪದ್ಮ ರಾಜ್ಯ ಪ್ರತಿನಿಧಿ, ಹಿರಿಯ ಸ್ಕೌಟರ್ ಆದ ಶ್ರೀ ಜವರಯ್ಯರವರು ಉಪಸ್ಥಿತರಿದ್ದರು.

ಈ ಕಾರ್ಯಕ್ರಮಕ್ಕೆ ಶ್ರೀ ಗಿರೀಶ್ ರಾಷ್ಟ್ರೀಯ ಸೇವಾ ಕಾರ್ಯಕರ್ತರು, ಪಾಲ್ಗೊಂಡು ಸಸಿಗಳನ್ನು ನೆಡಲು ಮಕ್ಕಳೊಂದಿಗೆ ಸಹಕರಿಸಿದರು. ಸುಮಾರು250ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್ ಮಕ್ಕಳು ಹಾಗೂ 20 ಸ್ಕೌಟ್ ಶಿಕ್ಷಕರು-ಗೈಡ್ ಶಿಕ್ಷಕಿಯರುಗಳು ಭಾಗವಹಿಸಿದ್ದರು. ಪರಿಸರ ಸಂರಕ್ಷಣೆಯ ಬಗ್ಗೆ ಅರಿವು ಮುಡಿಸಲು ಕೆಂಚಟ್ಟಹಳ್ಳಿ ಗ್ರಾಮದ ವಿವಿಧ ರಸ್ತೆಗಳಲ್ಲಿ ಸ್ಕೌಟ್ಸ್ - ಗೈಡ್ಸ್‌ಗಳಿಂದ ಪರಿಸರ ಘೋಷಣೆ ಮೂಲಕ ಜಾಥಾ ನಡೆಸಲಾಯಿತು.



## Bangalore South

Kumari AKHILA A.V., Rastrapathi Guide of New Horizon School, Indiranagar, Bangalore, has secured 94% in IInd P.U.C. Examination-2009. She secured A Medical seat at M.S. Ramaiah Medical College under Scout/Guide Quota.




Sri M.V. Rajashekaran, MLC. & Former Union Minister of State for Planning presenting 'Mother Theresa Excellence Award' for outstanding achievement in the field of Education to Dr. N.R. Shashikala, District Commissioner (Guides) & Principal, White Field Global School, on 11-7-2009 at Bangalore.

## Carmel School - Scouts & Guides Activities Inaugurated

The Inaguration of Scouts and Guides activities for the year 2009-10 was held at Carmel School, Padmanabhanagar on 19th June 2009.



Sri. M.A. Chellaiah, Headquarters commissioner (Publication) Inaugurated the activities. Smt. Geetha Mohan, Smt. Sribala and Smt. Jayashree Deshpande, Headmistress of various sections were present. Nearly 300 Cubs, Bulbuls, Scouts Guides including students & Teachers, participated in the programme. Smt. Indumathi Dilipan, ALT (B) Co-ordinated the programme along with all the Unit Leaders in the School.

## Bangalore North

**Shivajinagar Local Association** organised a get-together of Heads of Institution on 10 July 2009 at Kamala Bai High School, Queens road and felicitated them as a mark of centenary year of Scouting in India 2009. Nearly 25 Heads of Institution were present. Smt. Aruna. Asst secretary Kamala Bai Institution was the Guest. Miss Rathnanjali Nicodemus, President, Smt. Nirmala Prakash, Vice-President. Sri Krupanandan, Sri Muniera B.Mistry, Asst. Florence Neil, Secretary welcomed the gatherings and Sri Vishwanath Kakde Joint Secretary proposed the vote thanks. Sri Daniel & others were also present. Sri M.A. Chellaiah Headquarters Commissioner (Publication) Sri Prasanna Keerthi, H.W.B. & Mrs. B. Revathy, Dist. Training Commissioner (G) addressed the participants.

### Local Association Rally on The Eve of "100 Years of Scouting in India"

**Hebbal local Association** Rally was held at Sindhi High School , Hebbal, Kempapura. About 569 Cubs, Bulbuls, Scouts & Guides attended the Rally from different schools along with the their Unit Leaders. Mrs. Vijayalakshmi Vijaya Chand, Principal Inaugurated the Rally. Sri Bharath L.A. Secretary, Sri Shripadraj G. Muradi were present.

Cooking without fire, Quiz, Painting & Drawing Competition were held. Sri B.K. Sheshadri, Dist. Secretary, Sri A.M. Shankar, ASOC (S) visited the Rally. The valedictory function was held in the evening. Mrs. Sarumathi, Treasurer and others were present.

**Rajajinagar Local Association** Rally was held at Carmel High School, Basaveshwaranagar, on 12th July 2009. 180 Scouts, 144 Guides, 30 Cubs & Bulbuls from different Schools participated in the event. Competition like improvised shelter, Flag staff construction, Quiz, Rope craft were held. Sri B.K. Sheshadri Dist. Secretary, Sri Roshan Mensos, Administrator Carmel School, Sri Vikram, Secretary were present. Rovers from Field Marshal. K.M. Cariappa Rover Crew also attended the event.

## S.S.L.C. Achievers April 2009
## Sri Vani High School, Basaveswaranagar, Bangalore



**Manasa G.S.**
96.07 %



**Dechamma P.N.**
92.67 %



**Nithyashree Yadunath**
90.24 %

## I.C.S.E. Achievers March 2008-09
## Cluny Convent High School, Malleswaram, Bangalore- 03



**Amrita M.**
94.42 %
First in School



**Chaitra R.**
93.05 %

## ಶ್ರದ್ಧಾಂಜಲಿ

ಶಿವಮೊಗ್ಗ ಸ್ಕೌಟರ್ ಹೆಚ್. ದತ್ತಾತ್ರಿ ಇನ್ನಿಲ್ಲ. ರಾಜ್ಯ ರಾಷ್ಟ್ರಪ್ರಶಸ್ತಿ ಪುರಸ್ಕೃತ ಶಿಕ್ಷಕರಾಗಿದ್ದ ಹೆಚ್ಚ. ದತ್ತಾತ್ರಿ ಯವರು ತಮ್ಮ ೮೫ನೇ ವಯಸ್ಸಿನಲ್ಲಿ ದಿನಾಂಕ ೩-೭-೦೯ರಂದು ತಮ್ಮ ನಿವಾಸದಲ್ಲಿ ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ.



ಶ್ರೀಯುತರು ಆದರ್ಶ ಶಿಕ್ಷಕರಾಗಿ ವಿವಿಧ ಸರ್ಕಾರಿ ಶಾಲೆಗಳಲ್ಲಿ ಸೇವೆ ಸಲ್ಲಿಸಿ ಹೆಸರು ಪಡೆದಿದ್ದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಸ್ಕೌಟರ್, ಕಾರ್ಯದರ್ಶಿ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾಗಿ ಅನೇಕ ವರ್ಷಗಳು ದುಡಿದಿರುತ್ತಾರೆ. ಶ್ರೀಯುತರು ಪತ್ನಿ, ಈರ್ವರು ಪುತ್ರರು, ಈರ್ವರು ಪುತ್ರಿಯರು ಹಾಗೂ ಅಪಾರ ಬಂಧು ಬಳಗದವರನ್ನು ಅಗಲಿದ್ದಾರೆ.

ಇವರ ಅತ್ಯುತ್ತಮ ಸೇವೆ, ಶಿಸ್ತುಬದ್ಧ ಜೀವನ, ಶ್ರೇಯಸ್ಕರವಾದ ಕೆಲಸಗಳಿಗಾಗಿ ರಾಜ್ಯ, ರಾಷ್ಟ್ರ ಶಿಕ್ಷಕ ಪ್ರಶಸ್ತಿಗಳನ್ನು ಸರ್ಕಾರ ನೀಡಿ ಗೌರವಿಸಿದೆ. ಸ್ಕೌಟಿಂಗ್ ಕ್ಷೇತ್ರದಲ್ಲಿ ಇವರು ಸಲ್ಲಿಸಿದ ಸೇವೆಗಾಗಿ ರಾಷ್ಟ್ರ ಸಂಸ್ಥೆಯು "ರಜತ ನಕ್ಷತ್ರ" ಪ್ರಶಸ್ತಿ ನೀಡಿ ಗೌರವಿಸಿದೆ. ಇದರ ನಿಧನದಿಂದ ಜಿಲ್ಲಾ ಸಂಸ್ಥೆ ಹಾಗೂ ರಾಜ್ಯ ಸಂಸ್ಥೆಗೆ ತುಂಬಲಾರದ ನಷ್ಟವುಂಟಾಗಿದೆ.

ಭಗವಂತನು ಅವರ ಆತ್ಮಕ್ಕೆ ಸದ್ಗತಿ ಮತ್ತು ಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

## ಉಡುಪಿ

ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ಉಡುಪಿ, ಡಯಟ್ ಉಡುಪಿ, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಜಂಟಿಯಾಗಿ ದಿನಾಂಕ 12-07-09 ರಿಂದ 18-07-09 ರ ವರೆಗೆ ಕಲ್ಲಾನಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ತ್ರಾಸಿ, ಬೈಂದೂರು ವಲಯ, ಕುಂದಾಪುರ ತಾಲೂಕು ಇಲ್ಲಿ ಸಂಘಟಿಸಲಾಯಿತು. ರೆ.ಫಾ. ಅನಿಲ್ ಕರ್ನೆಲಿಯೋ ಸಂಚಾಲಕರು, ಕಲ್ಲಾನಿ ಮಾದರಿ ಪ್ರಾಥಮಿಕ ಶಾಲೆ, ತ್ರಾಸಿ ಇವರು ದೀಪ ಬೆಳಗಿಸಿ ತರಬೇತಿ ಶಿಬಿರವನ್ನು ಉದ್ಘಾಟಿಸಿದರು. ಶ್ರೀ ರಾಜು ದೇವಾಡಿಗ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸದಾಶಿವ ಭಟ್ ಸಹಾಯಕ ಜಿಲಾ ಆಯುಕ್ತರು(ಸ್ಕೌಟ್ಸ್) ಅತಿಥಿಗಳಾಗಿ ಭಾಗವಹಿಸಿದ್ದರು.

ಶಿಬಿರದ ಸಮಾರೋಪ ಸಮಾರಂಭವು ಬೈಂದೂರು ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ರಾಜು ದೇವಾಡಿಗರ ಅಧ್ಯಕ್ಷತೆಯಲ್ಲಿ ಜರುಗಿತು. ಕ್ರೈಸ್ಟ್ ಕಿಂಗ್ ಚರ್ಚ್‌ನ ಧರ್ಮಗುರುಗಳು ರೆ.ಫಾ. ಅನಿಲ್ ಕರ್ನೆಲಿಯೋ, ಕುಂದಾಪುರ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಎಸ್. ದಿನಕರಶೆಟ್ಟಿ, ಕುಂದಾಪುರ ಕ್ಷೇತ್ರ ಸಂಪನ್ಮೂಲ ಸಮನ್ವಯಾಧಿಕಾರಿ ಶ್ರೀ ಪ್ರಭಾಕರ ಮಿತ್ಯಮತ ಅತಿಥಿಗಳಾಗಿ ಭಾಗವಹಿಸಿದರು. ಸ್ಕೌಟ್ ತರಬೇತಿ ಶಿಬಿರದ ನಾಯಕರಾದ ಶ್ರೀ ಆನಂದ ಅಡಿಗ, ಗೈಡ್ ತರಬೇತಿ ಶಿಬಿರದ ನಯಕರಾದ ಶ್ರೀಮತಿ ರತ್ನಾವತಿ ಶೆಟ್ಟಿ ಶಿಬಿರದ ವರದಿ ನೀಡಿದರು. ಬುಲ್ ಬುಲ್ ತರಬೇತಿ ಶಿಬಿರದ ನಾಯಕರು ಶಿ. ಬಿಬಿಯಾನಾ ಕ್ರಿಸ್ತಿನಾ ಡೇಸಾ ಡಿ.ಟಿ.ಸಿ. (ಗೈಡ್ಸ್) ಕಬ್ ತರಬೇತಿ ಶಿಬಿರದ ನಾಯಕರಾದ ಶ್ರೀ ಎಸ್. ಎಸ್. ಹುಸೇನಿ ಉಪಸ್ಥಿತರಿದ್ದರು. ಶ್ರೀ ಎಂ. ಪ್ರಭಾಕರ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಸ್ವಾಗತಿಸಿದರು. ಶ್ರೀ ಕೊಗ್ಗ ಗಾಣಿಗ ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಧನ್ಯವಾದ ನೀಡಿದರು.

## SOC'S / STC'S Meet held at Hyderabad

The State Organising Commissioners & State Training Commissioners meet was held at National Institute of Rural Development, Rajendra Nagar, Hyderabad from 9th to 11th June 2009. Smt. Janaki Venugopal, State Organising Commissioner, (Guide) & Smt. K.K. Leela, State Training Commissioner (Guide) attended the meet .

| | | |
|---|---|---|
| ಸ್ಕೌಟಿಂಗ್ / ಗೈಡಿಂಗ್ | : | ಒಂದು ಆಟ, ಶಿಕ್ಷಣ ಮತ್ತು ಸಾಧನೆ |
| ಸ್ಕೌಟಿಂಗ್ / ಗೈಡಿಂಗ್ | : | ಬೇರೇನೂ ಅಲ್ಲ; ಒಂದು ಜೀವನ ವಿಧಾನ |
| ಸ್ಕೌಟಿಂಗ್ / ಗೈಡಿಂಗ್ | : | ಅದರ ಮಂತ್ರ ಸೇವೆ; ಸಹಬಾಳ್ವೆ; |
| ಸ್ಕೌಟಿಂಗ್ / ಗೈಡಿಂಗ್ | : | ಅದರ ವ್ಯಾಪ್ತಿ ಇಡೀ ಜಗತ್ತು |
| ಸ್ಕೌಟಿಂಗ್ / ಗೈಡಿಂಗ್ | : | ಆತ್ಮ ವಿಶ್ವಾಸ, ಸಾಹಸ ಮತ್ತು ಉಲ್ಲಾಸ; |
| ಸ್ಕೌಟಿಂಗ್ / ಗೈಡಿಂಗ್ | : | ಶಿಸ್ತು, ಸ್ವಾವಲಂಬನೆ ಮತ್ತು ದೈವಭಕ್ತಿ. |

## 100 YEARS OF SCOUT MOVEMENT IN INDIA

## THE BHARAT SCOUTS & GUIDES - COMMING EVENTS

| Sl. No. | Name of the Event | Dates | Venue |
|---|---|---|---|
| 1. | WAGGGS Advocacy Seminar II | 6th to 12th Sep' 2009 | Sangam World Centre, WAGGGS, Alandi Road, Yerawada, Pune-411006. |
| 2. | 12th Adventure Leaders Course | 11th to 20th Sep' 2009 | National Adventure Institute of Bharat Scouts & Guides Pachmarhi, Madya Pradesh-461881 |
| 3. | Pioneering Cum Estimation Course | 1st to 5th Oct' 2009 | National Youth Complex, Gadpuri, Palwal Dist, Haryana |
| 4. | Secretaries & Organisers Course | 1st to 5th Oct' 2009 | National Youth Complex, Gadpuri, Palwal Dist, Haryana |
| 5. | National Level Trekking & Nature Study Programme | 1st to 10th Oct' 2009 | Govt. Senior Secondary School, Kulu Manali, Raison Dist. Himachal Pradesh. |
| 6. | National Rovers & Rangers Moot | 6th to 10 Oct' 2009 | National Training Centre, Pachamarhi, Madhya Pradesh |
| 7. | National Rovers & Rangers Service Camp | 6th to 10 Oct' 2009 | National Camping cum Training Centre, New Ashoknagar, Delhi-110096 ( Near New Ashoknagar Metro Stn. Complex) |
| 8. | 26th Asia – Pacific Regional Scout Conference | 27th Oct - 1st Nov. 2009 | Hilton Hotel, Kuala Lumpur. |
| 9. | 16th National Jamboree | 6th to 12th Nov. 2009 | Shankarapally, Ranga Reddy Dist. Hyderabad, A.P. |
| 10. | National Integration Camp for Scouts & Guides | 20th to 26 Nov. 2009 | National Youth Complex, Gadpuri, Palwal Dist. Haryana. |
| 11. | 26th Jamborette of Karnataka State | During December 2009 | Bangalore, |

***"Building Scouting & Guiding Beyond 2013"***

# ಗರ್ಲ್‌ಗೈಡ್ ಮಾರ್ಗದರ್ಶಿ

## ಹೆಜ್ಜೆ-1 : ಗೈಡ್ ಚಳವಳಿಯ ಪರಿಚಯ

ಹಿಂದಿನ ತಿಂಗಳಿಂದ.........

**ಮೂಲ ಸಿದ್ಧಾಂತ :**

ಸಂಸ್ಥಾಪಕರಾದ ಬಿ.ಪಿ.ಯವರು ಈ ಚಳವಳಿಗಾಗಿ ಮೂಲಸಿದ್ಧಾಂತಗಳನ್ನು ರೂಪಿಸಿದ್ದಾರೆ. ಈ ಸಿದ್ಧಾಂತದ ಮಹತ್ವವೇ ಈ ಚಳವಳಿಯನ್ನು ಶತಮಾನದತ್ತ ನಡೆಸುತ್ತಿದೆ. ಪ್ರತಿ ಚಟುವಟಿಕೆಯಲ್ಲೂ ಮೂಲಸಿದ್ಧಾಂತವನ್ನು ಅಳವಡಿಸಿಕೊಳ್ಳುವುದು ಅವಶ್ಯಕ.

1. **ನಿರೂಪಣೆ** : ಸಂಸ್ಥಾಪಕರಾದ ಲಾರ್ಡ್ ಬೇಡನ್ ಪಾವೆಲ್‌ರು ಯುವಜನಾಂಗಕ್ಕಾಗಿ ದೇಶ, ಜಾತಿ, ಮತಗಳ ಬೇಧವಿಲ್ಲದೆ ಸ್ಥಾಪಿಸಿದ ಸ್ವಯಂಸೇವಕ ರಾಜಕೀಯಮುಕ್ತ, ಶಿಕ್ಷಣಪೂರಕವಾದ, ತನ್ನದೇ ಆದ ಧ್ಯೇಯೋದ್ದೇಶ, ಸಿದ್ಧಾಂತ ಮತ್ತು ವಿಧಾನಗಳನ್ನು ಹೊಂದಿರುವ ಚಳವಳಿಯು ಇದಾಗಿದೆ.

2. **ಉದ್ದೇಶ** : ಯುವಜನಾಂಗದ ಸಾಧನೆಗಾಗಿ, ಅವರಲ್ಲಿರುವ ದೈಹಿಕ, ಬೌದ್ಧಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಅಂತಃಸತ್ವವನ್ನು ಪರಿಪೂರ್ಣವಾಗಿ ಅಭಿವೃದ್ಧಿಗೊಳಿಸಿ ಅವರನ್ನು ಸ್ಥಳೀಯ, ರಾಷ್ಟ್ರೀಯ ಹಾಗೂ ಜಾಗತಿಕ ಸಮುದಾಯಗಳ ಸದಸ್ಯರನ್ನಾಗಿ ಹಾಗೂ ಜವಾಬ್ದಾರಿಯುತ ಪ್ರಜೆಗಳನ್ನಾಗಿ ಮಾಡುವುದೇ ಈ ಚಳವಳಿಯ ಮಹೋನ್ನತ ಉದ್ದೇಶವಾಗಿದೆ.

3. **ಸಿದ್ಧಾಂತ** : ದೇವರಲ್ಲಿ ನಂಬಿಕೆ, ದೇವರಿಗೆ ಕರ್ತವ್ಯ ಇತರರಿಗೆ ಸಹಾಯ, ತನಗೆ ಕರ್ತವ್ಯ ಪ್ರತಿಜ್ಞೆ ಮತ್ತು ನಿಯಮ,

4 **ವಿಧಾನ** : ಮಾಡುತ್ತಾ ಕಲಿಯುವುದು, ಹೊರಾಂಗಣದಲ್ಲಿ ಕಲಿಯುವುದು, ಅಷ್ಟಕದಲ್ಲಿ ಕಲಿಯುವುದು, ಸೇವೆಯ ಮೂಲಕ ಕಲಿಯುವುದು.

**ತರಬೇತಿಯ ಮಾರ್ಗೋಪಾಯಗಳು :**

ಚಳವಳಿಯ ಉದ್ದೇಶವನ್ನು ಸಾಧಿಸಲು ನೈಜ ಮಾರ್ಗೋಪಾಯಗಳನ್ನು ಬಿ.ಪಿ.ಯವರು ನೀಡಿದ್ದಾರೆ.

**ಚಾರಿತ್ರ್ಯಾಭಿವೃದ್ಧಿ :**

ನಮ್ಮ ತಾಯಿ ನಮ್ಮ ಮೊದಲ ಗುರು. ನಮ್ಮನ್ನು ಉತ್ತಮ ರೀತಿಯಲ್ಲಿ ಬೆಳೆಸುತ್ತಾರೆ. ಗೈಡಿಂಗ್ ನಮ್ಮನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಉತ್ತಮವಾಗಿ ಬೆಳೆಸುವ ಪ್ರಯತ್ನ ನಡೆಸುತ್ತದೆ. ಚಿಕ್ಕ ಗುಂಪಿನಲ್ಲಿ ಗೆಳತಿಯರೊಡನೆ ಒಟ್ಟಾಗಿ ಕಲಿಯುವ, ಕೆಲಸಮಾಡುವ ಅಷ್ಟಕ ಪದ್ಧತಿಯ ಮೂಲಕ ಚಾರಿತ್ರ್ಯವನ್ನು ನೈಜವಾಗಿ ಅಭಿವೃದ್ಧಿಗೊಳಿಸಲು ಹೆಚ್ಚಿನ ಅವಕಾಶ ನೀಡುತ್ತದೆ. ಇದರಿಂದ ಬಾಲಕಿಯರು ಭವಿಷ್ಯದಲ್ಲಿ ಉತ್ತಮ ವ್ಯಕ್ತಿಗಳಾಗಿ, ಉತ್ತಮ ನಾಗರೀಕರಾಗಿ, ಉತ್ತಮ ತಾಯಂದಿರಾಗುವರು. "ಸಚ್ಚಾರಿತ್ರ್ಯ ವ್ಯಕ್ತಿಯ ನೈಜ ಆಭರಣ".

**ಆರೋಗ್ಯಾಭಿವೃದ್ಧಿ** : ಈ ಕಾಲದಲ್ಲಿ ಇದು ಬಹಳ ದುಬಾರಿ. ಇದು ಗೈಡಿಂಗ್ ಇದನ್ನು ಕಾಪಾಡಿಕೊಳ್ಳಲು ನಿಮಗೆ ನಿಯಮಗಳನ್ನು ನೀಡುತ್ತದೆ. ಅಭ್ಯಾಸಗಳನ್ನು ಮಾಡಿಸುತ್ತದೆ. ಬಯಲಿನಲ್ಲಿ ವ್ಯಾಯಾಮ ಮಾಡುವುದು. ಕಲಿಯುವುದು. ಆಟವಾಡುವುದು, ಇದರಲ್ಲಿ ಕಡ್ಡಾಯ. ಪ್ರಕೃತಿಯ ಮಡಿಲಲ್ಲಿ ಶಿಬಿರವಾಸ ಮಾಡುವುದು ಇದರ ಮುಖ್ಯ ಚಟುವಟಿಕೆ ಹೊರ ಸಂಚಾರ ಇವೆಲ್ಲವುಗಳಿಂದ ನಿಮ್ಮ ಆರೋಗ್ಯ ವೃದ್ಧಿಯಾಗುತ್ತದೆ.

**ಕರಕೌಶಲ** : ಕೈಗಳು ಕೆಲಸದಲ್ಲಿ ತೊಡಗಿದ್ದರೆ, ಮನಸ್ಸು ಸಮಸ್ಥಿತಿಯಲ್ಲಿರುತ್ತದೆ. ಕಸೂತಿ, ಮಾದರಿ ತಯಾರಿಕೆ, ಚಿತ್ರಕಲೆ, ಕಾಗದದ ಕಲೆ, ಬಿದಿರಿನ ಕಲೆ, ತ್ಯಾಜ್ಯ ವಸ್ತುಗಳ ಬಳಕೆ ಮಾಡಿ ಕೈಕೆಲಸ ಮಾಡಲು ಗೈಡಿಂಗ್‌ನಲ್ಲಿ ಅವಕಾಶ ನೀಡಲಾಗುತ್ತದೆ. ನಮ್ಮ ಸಂಸ್ಕೃತಿ ಮತ್ತು ಪರಂಪರೆಯಲ್ಲಿ ಕರಕುಶಲತೆ ಹಾಸುಹೊಕ್ಕಾಗಿದೆ. ಭಾರತೀಯ ಕರಕುಶಲತೆಗೆ ದೇಶ ವಿದೇಶಗಳಲ್ಲಿ ಭಾರಿ ಬೇಡಿಕೆ ಇದೆ. ಈ ಹವ್ಯಾಸವನ್ನು ಬೆಳೆಸಿ ಕೊಂಡರೆ ನಿಮಗೆ ಭವಿಷ್ಯದಲ್ಲಿ ಆದಾಯದಾಯಕ ವಾಗಬಹುದು. ಎಲ್ಲಕ್ಕೂ ಮಿಗಿಲಾಗಿ ಈ ಹವ್ಯಾಸದಿಂದ ಸೃಜನಶೀಲತೆ ಹೊರಹೊಮ್ಮಿ ಆತ್ಮತೃಪ್ತಿ ದೊರೆಯುತ್ತದೆ.

**ಸೇವೆ**: ಸೇವೆಯೇ ಮಾನವ ಜನ್ಮದ ಪರಮಧರ್ಮ, ಅಗತ್ಯವಿರುವವರಿಗೆ ಸಂಕಷ್ಟದಲ್ಲಿ ತಕ್ಷಣವೇ ಮಾಡುವ ಸಹಾಯವೇ ಸೇವೆ. ಇದಕ್ಕಾಗಿ ಗೈಡಿಂಗ್‌ನಲ್ಲಿ ಪ್ರಥಮ ಚಿಕಿತ್ಸೆ, ಸುರಕ್ಷತೆ ಮತ್ತು ರಕ್ಷಣಾ ವಿಧಾನಗಳ ಪ್ರತ್ಯಕ್ಷ ತರಬೇತಿ ನೀಡಲಾಗುವುದು. ಇವುಗಳಲ್ಲದೆ ಸಮುದಾಯ ಮತ್ತು ಸಮಾಜ ಸೇವೆಯಲ್ಲೂ ತೊಡಗಿಸಲಾಗುವುದು. ಇದೆಲ್ಲದರ ಜೊತೆಗೆ ಬುದ್ಧಿಶಕ್ತಿಯನ್ನು ಬೆಳೆಸಲು ಗೈಡಿಂಗಿನಲ್ಲಿ ವಿಫುಲ ಅವಕಾಶವನ್ನು ನೀಡಲಾಗಿದೆ. ನಕ್ಷಾಕೌಶ‌ಲ, ಸಂಕೇತ ಭಾಷೆಗಳು, ಬುದ್ಧಿಗೆ ಸವಾಲು ನೀಡುವ ಚಟುವಟಿಕೆಗಳು ಹಾಗೆಯೇ ಪ್ರಕೃತಿ ಸಂಚಾರ, ಅನ್ವೇಷಣೆ, ಸಾಹಸಕಾರ್ಯಗಳು ನಾನಾ ಸವಾಲುಗಳನ್ನು ಒಡ್ಡಿ ಅವುಗಳನ್ನು ಎದುರಿಸುವ ಸಾಮರ್ಥ್ಯ ಬೆಳೆಸುತ್ತದೆ. ಈ ವೇಗದ ವಿಶ್ವದಲ್ಲಿ. ಆಧುನಿಕ ಗಣಕೀಕೃತ ಯುಗದಲ್ಲಿ ಬುದ್ಧಿಶಕ್ತಿಯನ್ನು ಸಮರ್ಥವಾಗಿ ಬೆಳೆಸಿಕೊಳ್ಳದಿದ್ದರೆ, ನಾವೂ ಕಳೆದುಹೋಗಿಬಿಡುತ್ತೇವೆ.

ಈ ನಾಲ್ಕು ಮಾರ್ಗಗಳನ್ನು ಅನುಸರಿಸುತ್ತಾ ಮಹಿಳೆಯರಿಗೆ ಮತ್ತು ಬಾಲಕಿಯರಿಗೆ ತರಬೇತಿಯನ್ನು ನೀಡಲಾಗುವುದು. ಈ 4 ಅಂಶಗಳ ಆಧಾರದ ಮೇಲೆ ಎಲ್ಲಾ ಚಟುವಟಿಕೆಗಳನ್ನು ರೂಪಿಸಲಾಗಿದೆ.

ಮುಂದುವರೆಯುವುದು..................

# ಧರ್ಮ – ದೇವರು

– ಗೊ.ರು. ಚನ್ನಬಸಪ್ಪ

ಬದುಕು ಎಲ್ಲ ಹೊತ್ತಗೆಯಲಲ್ಲ,
ಹುಗಿದಿಲ್ಲ ದುಡ್ಡಿನಂತೆ
ಮಾಡಿದಂತೆ ಅದರಾಟ, ಮಾಟ,
ಒಟ್ಟಿದರೆ ಗುಡ್ಡದಂತೆ
ಕೈಗೆ ಸಿಕ್ಕೂ ಸಿಗದಂತೆ
ಬೂರಲದ ಅರಳ ಹೂವಿನಂತೆ,
ಬಟ್ಟ ಬಯಲಿನ ಗುಟ್ಟನೊಡೆದು
ಗಾಳಿಯಲಿ ಹರಡಿದಂತೆ!

ನಮ್ಮ ನಾಡಿನ ಹಿರಿಯ ಕವಿ ಚನ್ನವೀರ ಕಣವಿ ಅವರ ಕವನವೊಂದರ ನಾಲ್ಕು ಸಾಲುಗಳಿವು. ಬದುಕಿನ ಬಗೆಗೆ ಬರೆದಿರುವ ವ್ಯಾಖ್ಯಾನದಂತಿರುವ ಈ ಸಾಲುಗಳು ತುಂಬ ಅರ್ಥಪೂರ್ಣವಾಗಿವೆ. ಬದುಕೆಂಬುದು ಪುಸ್ತಕದ ಸಾಹಿತ್ಯವಲ್ಲ; ನೆಲದ ಮರೆಯ ನಿಧಿಯೂ ಅಲ್ಲ. ಆಟ – ಮಾಟಗಳು ನಾವು ನಡೆದಂತೆ. ಅದು ಕೈಗೆ ಸಿಕ್ಕೂ ಸಿಗದ ವಿಧಾನ; ಬಳಸಿಯೂ ಉಳಿಯುವ ನಿಧಾನ. ಬಯಲಲ್ಲಿ ಒಡೆದ ಗುಟ್ಟು!

ಸೃಷ್ಟಿಕರ್ತ ಬ್ರಹ್ಮನಿರಬಹುದು. ಅದರೆ ಬದುಕಿನ ಬ್ರಹ್ಮ ಮಾನವನೇ. ಆದರೂ ಅದನ್ನು ಅವನೇ ಇನ್ನೂ ಅರ್ಥಮಾಡಿಕೊಂಡಿಲ್ಲ. ಅದರ ಬಗೆಗೆ ಅವನು ಕುತೂಹಲಿಯಾಗೇ ಇದ್ದಾನೆ. ಅದರ ಅನ್ವೇಷಣೆಯಲ್ಲೇ ತೊಡಗಿದ್ದಾನೆ. ಈ ಅನ್ವೇಷಣೆ ಮಾನವನ ಸೃಷ್ಟಿಯಾದಾಗಿನಿಂದಲೂ ನಡೆದಿರುವ ಹುಡುಕಾಟ. ಈ ಹುಡುಕಾಟದಲ್ಲಿ ಅವನು ಕಂಡುಕೊಂಡುದಕ್ಕಿಂತ ಕಾಣಬೇಕಾದುದೇ ಇನ್ನೂ ಇದೆ ಎಂಬ ಅನುಭವ ಅವನಿಗಾಗಿದೆ. ಬದುಕೆಂದರೆ ಇಷ್ಟೇ ಎಂದು ಸ್ಪಷ್ಟ ನಿರ್ಧಾರಕ್ಕೆ ಬರಲಾಗಿಲ್ಲ.

ಸೃಷ್ಟಿಕರ್ತ ಮಾನವನನ್ನು ಸೃಷ್ಟಿಸಿಯಷ್ಟೇ ಸುಮ್ಮನಿರಲಿಲ್ಲ. ಒಂದು ಚೇಷ್ಟೆಯನ್ನು ಮಾಡಿದ. ಮಾನವನ ಭೌತಿಕ ದೇಹದಲ್ಲಿ ಆಂತರಿಕ ಸ್ವಭಾವಗಳ ಸಸಿಗಳನ್ನು ನೆಟ್ಟುಬಿಟ್ಟ. ಈ ಸ್ವಭಾವಗಳ ಅಭಾವ – ಅತಿರೇಕಗಳಿಂದಾಗಿ ಮಾನವ ತಾನು ಅಪೇಕ್ಷಿಸುವ ಸುಖಕ್ಕೆ ಎರವಾಗಿರುವುದುಂಟು; ನೆಮ್ಮದಿಯನ್ನು ಕಳೆದುಕೊಂಡಿರುವುದುಂಟು. ಬದುಕಿನಲ್ಲಿ ಒಳಿತು ಕೆಡಕುಗಳು ಸಂಭವಿಸುವುದೇ ಈ ಸ್ವಭಾವಗಳಿಂದ. ಎಂಥ ಸ್ವಭಾವದಿಂದ ಒಳಿತಾಗುತ್ತದೆ, ಎಂಥ ಸ್ವಭಾವದಿಂದ ಕೆಡುಕಾಗುತ್ತದೆ

ಎಂಬುದನ್ನೂ ಮಾನವ ಬಲ್ಲ. ಆದರೆ ಸ್ವಭಾವಗಳ ಮೇಲೆ ನಿಯಂತ್ರಣ ಸಾಧಿಸಲಾರದೆ ಗೊಂದಲಕ್ಕೆ ಈಡಾಗಿದ್ದಾನೆ. ಈ ಗೊಂದಲದಿಂದ ಪಾರಾಗುವ ಪರಿಹಾರ ಮಾರ್ಗದ ಹುಡುಕಾಟದ ಹಾದಿಯಲ್ಲಿ ಅವನು ಕಂಡುಕೊಂಡ ಸಮಾಧಾನಗಳೇ 'ಧರ್ಮ' ಮತ್ತು 'ದೇವರು'.

ಎಂದರೆ 'ಧರ್ಮ' ಮತ್ತು 'ದೇವರು' ಎರಡೂ ಮಾನವ ಸೃಷ್ಟಿಯೇ. ಆದರೆ ಇವೂ ಅಷ್ಟೇ. ಒಬ್ಬೊಬ್ಬರ ದೃಷ್ಟಿಗೆ ಒಂದೊಂದು ಧರ್ಮ; ಒಬ್ಬೊಬ್ಬರಿಗೆ ಒಂದೊಂದು ದೇವರಾಗಿ ಬಿಟ್ಟಿದೆ. ಒಡೆಯನ ಧರ್ಮ ಒಂದಾದರೆ, ದುಡಿಯುವವನ ಧರ್ಮವೇ ಬೇರೆ. ಅವನ ದೇವರೇ ಬೇರೆ; ಇವನ ದೇವರೇ ಬೇರೆ. ಮಾನವ ತನ್ನ ಬದುಕಿನ ಸಮಾಧಾನಕ್ಕಾಗಿ ತಾನೇ ಕಂಡುಕೊಂಡ ಅಥವಾ ಸೃಷ್ಟಿಸಿದ ಈ ಧರ್ಮವಾಗಲಿ, ದೇವರಾಗಲೀ ಅವನ ಬದುಕಿನ ಇತಿಹಾಸದಲ್ಲಿ ಅವನಿಗೆ ನೆಮ್ಮದಿ ತಂದುಕೊಟ್ಟಿದೆ ಎಂದು ಹೇಳುವಂತಿಲ್ಲ. ಏಕೆಂದರೆ ಅವುಗಳ ಅಸ್ತಿತ್ವದಲ್ಲಿ ನಂಬಿಕೆ ಇಟ್ಟು ಅವನು ತನ್ನ ಬದುಕಿನ ಸಂಕಟದಿಂದ ಬಿಡುಗಡೆಯಾಗಲು ಸಾಧ್ಯವಾಗಿಲ್ಲ. ದೂರ ಹೋಗುವುದು ಬೇಡ. ಧರ್ಮದ ತಲಕಾವೇರಿ, ದೇವರ ಅವತಾರ ತಾಣ ಎಂದು ಹೇಳಿಕೊಳ್ಳುವ ನಮ್ಮ ಭಾರತದ ಸ್ಥಿತಿ ಗತಿಗಳನ್ನೇ ಗಮನಿಸೋಣ. ಈ ಧರ್ಮ - ದೇವರುಗಳ ಹೆಸರಿನಲ್ಲಿ ನಾವು ನಿತ್ಯವೂ ಕತ್ತಲೆಯ ಕೂಪಕ್ಕೆ ಕಾಲಿಡುತ್ತಿದ್ದೇವೆ. ವ್ಯಕ್ತಿ ವ್ಯಕ್ತಿಯ ಸಂಬಂಧಕ್ಕೆ ಬೆಂಕಿ ಹಚ್ಚಿ ಹುಚ್ಚರಂತೆ ಕುಣಿಯುತ್ತಿದ್ದೇವೆ. ಧರ್ಮರಕ್ಷಣೆಯ ನೆಪದಲ್ಲಿ ಧೂಮಕೇತುಗಳಾಗುತ್ತಿದ್ದೇವೆ. ದೇವರ ಉತ್ಸವವೆಂದು ಸಾವಿನ ಉತ್ಸವ ನಡೆಸುತ್ತಿದ್ದೇವೆ.

ದೇವರೆಂದರೆ ನಾವು ಸ್ಥಾಪಿಸಿರುವ ಗುಡಿಯ ವಿಗ್ರಹವಲ್ಲ; ನಿಶ್ಚಯದ ಚಿತ್ತವಿದ್ದರೆ ಆತನೆ ದೇವರಾಗುತ್ತಾನೆ. ದೇವರು-ಧರ್ಮಗಳ ಬಗೆಗೆ ಸ್ಪಷ್ಟ ಕಲ್ಪನೆಯಿಲ್ಲದೆ ನಾವೆಲ್ಲ ಒಂದು ರೀತಿಯ ಮೂಕ ಹಿಂಸೆಗೆ ತುತ್ತಾಗಿದ್ದೇವೆ. ಭಯ-ಸಂಶಯಗಳ ಮುಳ್ಳು ಹಾದಿಯಲ್ಲಿ ನಡೆಯುತ್ತಿದ್ದೇವೆ. ನಮಗೆ ಎಷ್ಟೊಂದು ವೈಚಾರಿಕತೆಯ ಹಿನ್ನೆಲೆಯಿದ್ದರೂ ಮೃಗಗಳಂತೆ ಬದುಕು ನಡೆಸಿದ್ದೇವೆ. ಉತ್ಥಾನದ ಹಾದಿಗೆ ಬದಲಾಗಿ ಪತನದ ಹಾದಿ ತುಳಿದಿದ್ದೇವೆ. ಈ ಹಿನ್ನೆಲೆಯಲ್ಲಿ ನಾವು ಧರ್ಮ - ದೇವರುಗಳ ಬಗೆಗೆ ಮರುಚಿಂತನೆ ನಡೆಸಬೇಕಾಗಿದೆ.

ಜೀವನ ಒಂದು ವಾಹಿನಿ, ನಿಂತ ನೀರಲ್ಲ, ಅಂತೆ ಧರ್ಮ-ದೇವರುಗಳ ಪರಿಕಲ್ಪನೆಗಳೂ ಕೂಡ. ಇವುಗಳ ಬಗೆಗೂ ಹೊಸ ಹೊಸ ಆವಿಷ್ಕಾರ- ಪರಿಷ್ಕಾರಗಳು ನಡೆಯಬೇಕಾಗಿದೆ. ಯಾವುದೇ ಆವಿಷ್ಕಾರ ಪರಿಷ್ಕಾರಗಳು ನಮ್ಮ ಅನುಭವದ ಆಧಾರದ ಮೇಲೆ ನಡೆದರೆ ನಮಗೆ ನಿಶ್ಚಿತ ನಿಲುವು ದೊರಕಲು ಸಾಧ್ಯ. ಅಂತಹ ಮರುಚಿಂತನೆಗೆ, ಆವಿಷ್ಕಾರಕ್ಕೆ ನಮ್ಮ ಲೋಕಾನುಭವಕ್ಕಿಂತ ಮಿಗಿಲಾದ ಪ್ರಯೋಗಾಲಯ ಮತ್ತೊಂದಿಲ್ಲ.

ನಮಗೆ ಬೇಕಾಗಿರುವುದು ಜಡಧರ್ಮವಲ್ಲ; ಜೀವನ ಧರ್ಮ. ನಮಗೆ ಬೇಕಾಗಿರುವುದು ಗುಡಿಯ ದೇವರಲ್ಲ; ನಾವೇ ದೇವರಾಗುವುದು!

...............ಹಿಂದಿನ ಸಂಚಿಕೆಯಿಂದ

ಅಧ್ಯಾಯ - 2



ಕಾರ್ಯಸರಣಿ (CAMPAIGNING)

## ಶಿಬಿರಾಗ್ನಿ ಉದಂತ ಸಂ – 5

# ಹೊರಾಂಗಣದಲ್ಲಿ ಜೀವನ

**ಪರಿಶೋಧನೆ – ಪರ್ವತಾರೋಹಣ – ಗಸ್ತು ತಿರುಗುವುದು – ರಾತ್ರಿಯ ವೇಳೆ ಚಟುವಟಿಕೆಗಳು ದಾರಿಯನ್ನು ಕಂಡುಕೊಳ್ಳುವುದು ಉತ್ತರ ದಿಕ್ಕನ್ನು ಕಂಡುಕೊಳ್ಳುವುದು – ಹವಾಮಾನ ಪರಿಜ್ಞಾನ**

ದ. ಆಫ್ರಿಕಾದ ಬುಡಕಟ್ಟು ಜನಾಂಗಗಳ ಪೈಕಿ, ಜೂಲೂಗಳು ಮೊದಲಿಗರು. ಅವರಲ್ಲಿ ವಯಸ್ಕನಾದ ಪ್ರತಿಯೊಬ್ಬನೂ, ಬಾಲ್ಯದಲ್ಲಿ ಸ್ಕೌಟಿಂಗ್ ಕಲಿತು, ನುರಿತ ಯೋಧನೂ, ಒಳ್ಳೆಯ ಸ್ಕೌಟೂ ಆಗಿರುತ್ತಾನೆ.

ಬಾಲಕನು ಯೋಧನಾಗುವ ವಯಸ್ಸಿಗೆ ಬಂದಕೂಡಲೇ ಅವನ ಬಟ್ಟೆಗಳನ್ನು ಕಳಚಿ ದೇಹ ಪೂರಾ ಬಿಳಿಯ ಬಣ್ಣವನ್ನು ಬಳಿಯುತ್ತಾರೆ. ಆತ್ಮರಕ್ಷಣೆಗಾಗಿ ಅವನಿಗೆ ಈಟಿಯನ್ನೂ, ಗುರಾಣಿಯನ್ನೂ ಕೊಡುತ್ತಾರೆ. ಇದು ಅವನಿಗೆ ಶತ್ರುಗಳನ್ನೂ ಆಹಾರಕ್ಕಾಗಿ ಪ್ರಾಣಿಗಳನ್ನೂ ಕೊಲ್ಲಲು ಬರುತ್ತದೆ. ದೇಹಾದ್ಯಂತ ಬಣ್ಣವನ್ನು ಬಳಿದ ಬಳಿಕ ಅವನನ್ನು ಕಾಡಿಗೆ ಅಟ್ಟುತ್ತಾರೆ.

ಬಿಳಿಯ ಬಣ್ಣವಿನ್ನೂ ಇರುವಾಗ ಅವನು, ಯಾರ ಕಣ್ಣಿಗಾದರೂ ಬಿದ್ದರೆ ಕೂಡಲೇ ಅವನನ್ನು ಬೇಟೆಯಾಡಿ ಕೊಲ್ಲುತ್ತಾರೆ. ಆ ಬಿಳಿಯ ಬಣ್ಣವನ್ನು ತೊಳೆಯಲು ಸಾಧ್ಯವಾಗುತ್ತಿರಲಿಲ್ಲ. ಒಂದು ತಿಂಗಳ ಕಾಲದಲ್ಲಿ ಅದು ತನ್ನಷ್ಟಕ್ಕೆ ತಾನೇ ಮಾಯವಾಗಿಬಿಡುತ್ತಿತ್ತು.

ಆದ್ದರಿಂದ ಅವನು ಒಂದು ತಿಂಗಳ ಕಾಲ ಕಾಡಿನಲ್ಲಿ, ತಲೆಮರೆಸಿಕೊಂಡು, ಕೈಲಾದಷ್ಟು ನೆಮ್ಮದಿಯಿಂದ, ಜೀವನವನ್ನು ನಡೆಸಬೇಕಾಗಿದ್ದಿತು. ಅವನು ಜಿಂಕೆಯ ಜಾಡು ಹಿಡಿದು, ಅನುಸರಿಸಿ ಹೋಗಿ, ಅದರ ಗಮನವನ್ನು ಸೆಳೆಯದಂತೆ ಹತ್ತಿರ ನುಸುಳಿ, ಅದನ್ನು ಕೊಂದು, ತನ್ನ ಆಹಾರವನ್ನು ತೊಡಿಗೆಯನ್ನು ಸಂಪಾದಿಸಿಕೊಳ್ಳಬೇಕಾಗಿದ್ದಿತು. ಎರಡು ಕಟ್ಟಿಗೆಗಳನ್ನು ತಿಕ್ಕಿ, ಅಡಿಗೆ ಮಾಡಲು ಬೆಂಕಿ ಮಾಡಿಕೊಳ್ಳಬೇಕಾಗಿದ್ದಿತು. ತನ್ನನ್ನು ಹಿಡಿಯಲು ಹೊಂಚು ಹಾಕುತ್ತಿರಬಹುದಾದ ವ್ಯಕ್ತಿಗಳಿಂದ ರಕ್ಷಿಸಿಕೊಳ್ಳಲು, ಬೆಂಕಿಯಿಂದ ಹೆಚ್ಚು ಹೊಗೆ ಬರದಂತೆ ನೋಡಿಕೊಳ್ಳಬೇಕಾಗಿದ್ದಿತು ಮತ್ತು ಬೆನ್ನಟ್ಟಿ ಬರುವ ಅಂತಹವರಿಂದಲೂ, ಕಾಡು ಮೃಗಗಳಿಂದಲೂ ರಕ್ಷಿಸಿಕೊಳ್ಳಬೇಕಾಗಿದ್ದಿತು. ಆ ಕಾರಣ ಬಹಳ ದೂರ ವೇಗವಾಗಿ ಓಡುವುದು, ಮರ ಹತ್ತುವುದು, ನದಿಗಳಲ್ಲಿ ಈಜುವುದು ಮುಂತಾದವುಗಳನ್ನು ಮಾಡಲು ಶಕ್ತನಾಗಿರಬೇಕಾಗಿದ್ದಿತು.



ಜ್ಞೂಲುಗಳಲ್ಲಿ, ಬಾಲಕನಿಂದ ವಯಸ್ಕನವರೆಗೆ ಕಂಡುಬರುವ, ಉಂಫಾನ್ (ಚಾಪೆ ಹುಡುಗ) ಯುವ ಯೋಧ ಹಾಗೂ ಉಂಗುರಧಾರಿ ವಯಸ್ಕ.

ಅವನು ಧೈರ್ಯಶಾಲಿಯಾಗಿದ್ದು ತನ್ನ ಮೇಲೆರಗಬಹುದಾದ ಸಿಂಹವೇ ಮೊದಲಾದ ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಬೇಕಾಗಿದ್ದಿತು.

ತಿನ್ನಬಹುದಾದಂತಹ ಗಿಡಮೂಲಿಕೆಗಳು ಮತ್ತು ತಿನ್ನಬಾರದಂತಹ ವಿಷಪೂರಿತ ಗಿಡಗಳನ್ನು ತಿಳಿದುಕೊಳ್ಳಬೇಕಾಗಿದ್ದಿತು. ಕಣ್ಮರೆಯಾಗಿರುವಂತೆ ತನ್ನ ವಾಸಕ್ಕೆ ಗುಡಿಸಲನ್ನು ಕಟ್ಟಿಕೊಳ್ಳಬೇಕಾಗಿದ್ದಿತು.

ಇತರರು ತನ್ನನ್ನು ಹಿಂಬಾಲಿಸಿ ಬರಬಹುದಾದಂತಹ ಯಾವುದೇ ರೀತಯ ಹೆಜ್ಜೆ ಗುರುತುಗಳನ್ನೂ ಬಿಡದಂತೆ ಎಚ್ಚರಿಕೆ ವಹಿಸಬೇಕಾಗಿದ್ದಿತು.

ಒಮ್ಮೆ ಉರಿಬಿಸಿಲಿನಲ್ಲಿಯೂ, ಮತ್ತೊಮ್ಮೆ ಚಳಿಯಲ್ಲಿಯೂ, ಮಗದೊಮ್ಮೆ ಸುರಿಮಳೆಯಲ್ಲಿಯೂ, ಒಂದು ತಿಂಗಳ ಕಾಲಾವಧಿ, ಅವನು ಈ ರೀತಿಯ ಕಷ್ಟಕರ ಜೀವನವನ್ನು ನಡೆಸಬೇಕಾಗಿದ್ದಿರು. ಬಳಿದಿದ್ದ ಬಿಳಿಯ ಬಣ್ಣವು ಮಾಯವಾದ ಬಳಿಕ, ಅವನಿಗೆ ಊರಿಗೆ ಹಿಂತಿರುಗಲು ಅನುಮತಿ

ರೀತಿಯಲ್ಲಿ ಅವನು ಬುಡಕಟ್ಟಿನ ಯುವ ಯೋಧರೊಡನೆ ಸೇರಿಸಿಕೊಳ್ಳ ಲಾಗುತ್ತಿದ್ದಿತು. ಈ ರೀತಿಯಲ್ಲಿ ಅವನು, ತಾನು ಸ್ವಾವಲಂಬಿಯೆಂಬುದನ್ನು ಮನಗಾಣುವಂತೆ ತೋರಿಸಬೇಕಾಗಿದ್ದಿತು.

ದ. ಅಮೆರಿಕಾದ ಯಾಗಾನ್ ಬುಡಕಟ್ಟಿನವರು, ಪೆಟಗೋನಿಯಾದ ಚಳಿ, ಮಳೆಯಿಂದ ಕೂಡಿದ ಆ ಪ್ರದೇಶದಲ್ಲಿ, ಜನಾಂಗದ ವಯಸ್ಕರೊಡನೆ ಸೇರಿಕೊಳ್ಳುವುದಕ್ಕೆ ಮುಂಚೆ, ಬಾಲಕರಿಗೆ ಒಂದು ಪರೀಕ್ಷೆ ಮಾಡುತ್ತಾರೆ. ಬಾಲಕರು ತಮ್ಮ ಧೈರ್ಯೋತ್ಸಾಹಗಳನ್ನು ಬಿಂಬಿಸುವ ಈ ಪರೀಕ್ಷೆಗಾಗಿ, ಈಟಿಯನ್ನು ತಮ್ಮ ತೊಡೆಯೊಳಗೆ ಆಳವಾಗಿ ಹೋಗುವಂತೆ ತಿವಿದುಕೊಳ್ಳಬೇಕು. ತಿವಿದುಕೊಳ್ಳುವ ಸಮಯದಲ್ಲಿ ನೋವನ್ನು ಸಹಿಸಿಕೊಂಡು ಮಂದಹಾಸ ಬೀರಬೇಕು.

ಇದು ಹಿಂಸಾತ್ಮಕ ಪರೀಕ್ಷೆಯೇ ಸರಿ. ಆದರೆ “ನಾವು ಕಾಣುವ ಬಾಲಕರು, ನಿರುತ್ಸಾಹಿಗಳೂ, ನಿಷ್ಪ್ರಯೋಜಕರೂ ಆಗದಂತೆ ಮನುಷ್ಯಯೋಗ್ಯ ಗುಣಗಳ ಬಗ್ಗೆ ತರಬೇತಿ ನೀಡಬೇಕು. ಇತರರು ಮಾಡುವ ಕೆಲಸವನ್ನು ನೋಡುತ್ತಾ ನಿರುತ್ಸಾಹಿಗಳಾಗಿ ವ್ಯರ್ಥ ಜೀವಿಗಳಾಗಲು ಬಿಡಬಾರದು. ಅದಕ್ಕೆ ಅವಕಾಶ ಕೊಡಬಾರದು.” ಎಂಬುದನ್ನು ಈ ಜನರು ಅರಿತಿದ್ದರು.

(ಪುರಾತನ ಕಾಲದ ಭಾರತದಲ್ಲಿ ಸಹ, ಬಾಲಕರನ್ನು ಪುರುಷಯೋಗ್ಯರೆಂದು ಪರಿಗಣಿಸುವುದಕ್ಕೆ ಮುಂಚೆ ಇದೇ ರೀತಿಯ ಶಿಕ್ಷಣವೇ ದೊರಕುತ್ತಿದ್ದಿತು.)

ಸ್ಕೌಟಿಂಗ್‌ನಲ್ಲಿ ಪ್ರತಿಬಾಲಕನೂ ಕಷ್ಟಪಟ್ಟು ಕಲಿಯುವುದಾದರೆ ಅವನು ದೊಡ್ಡವನಾದಾಗ ತನ್ನನ್ನು ನೋಡಿಕೊಳ್ಳಲೂ ಹೆಮ್ಮೆಯಿಂದ ತಾನು ಸ್ಕೌಟ್, “ಉಪಯುಕ್ತ ಮಾನವ” ನೆಂದು ಹೇಳಿಕೊಳ್ಳಲೂ ಬರುತ್ತದೆ.

## Through a message of Love & Peace

Our Movement embodies a message of peace for Young People and adults all over the World. We believe in the power of love to bring about change and we extend this love to everyone regardless of their colour, language, creed, background or political views.



Peace is built by the benevolent and altruistic, those who are capable of putting their own life to the service of others. They unite their efforts as part of a mission in which everyone has a part of a mission in which everyone has a part of play. Peace is the synthesis of individual actions and an on-going challenge for us all.

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

Karnataka Scout and Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227



ಸಂಚಿಕೆಯ ವಾರ್ಷಿಕ ಚಂದಾ ರೂ. 50/-
ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100/-

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು





**Felicitations to : His Excellency the Governor Sri Rameshwar Thakur by Sri. Kondajji B. Shanmukhappa, Sri L.M. Jain & M.A. Khalid.**



**Sri Vishwehwar Hegde Kageri,**
Ion'ble Minister for Primary & Secondary Education
conversation with & Sri T. Prabhakar, State Treasurer



His Excellency the Governor **Sri Rameshwar Thakur**
& Smt. Narmada Thakur leaving
the Glass House after hosting lunch.
Smt. Sharada Subramanyam
Secretary to His Excellency is also seen.





Karnataka Support Team for National Conference

**Regd as News Paper (Magazine) No : CPMG/KA/BGW-549/2009-11** Permitted to Post under WPP System
Vide No.: WPP-87 of SSP, Bangalore West Posted at: Bangalore City H.P.O. on 30-07-2009

# Cultural Evening at the National Conference



Issac Newton High School



Bishop Cotton Girls High School



Chamarajpet Girls High School



Cathedral High School


Cluny Convent School



Jnana Sowrabha Yakshagana Mandali



8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase, West of Chord Road,
Mahalakshmipuram, Bangalore-560086.

If not delivered, please return to :
THE EDITOR, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine